ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 06 ನೇ ಮಾರ್ಚ್, 2020

ದೇಸಿ ಗೋವುಗಳ ರಕ್ಷಣೆ ಹಾಗೂ ಅವುಗಳ ತಳಿ ಅಭಿವೃದ್ಧಿ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

366 (336) ಮಾನ್ಯ ಪಶುಸಂಗೋಪನೆ ಹಾಗೂ ಹಜ್ ಮತ್ತು ವಕ್ಫ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ದೇಸಿ ಗೋವುಗಳ ರಕ್ಷಣೆ ಮತ್ತು ಅವುಗಳ ತಳಿ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರ್ಕಾರ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ;

(ಆ) ಜಾನುವಾರುಗಳ ಅಕ್ರಮ ಸಾಗಾಟ ಮತ್ತು ಅನಧಿಕೃತ ಕಸಾಯಿ ಖಾನೆಗಳಲ್ಲಿ ಗೋವುಗಳನ್ನು ಮಾಂಸಕ್ಕಾಗಿ ಹತ್ಯೆ ಮಾಡುತ್ತಿರುವುದರಿಂದ ರಾಜ್ಯದಲ್ಲಿ ಗೋವುಗಳ ಪ್ರಮಾಣ ಕಡಿಮೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಅಕ್ರಮವಾಗಿ ಗೋವುಗಳ ಸಾಗಾಟ ಮತ್ತು ಹತ್ಯೆಯನ್ನು ನಿಲ್ಲಿಸಲು ಗೋವುಗಳ ಸಂರಕ್ಷಣಾ ಕಾನೂನನ್ನು ರಚಿಸುವ ಬಗ್ಗೆ ಸರ್ಕಾರದ ನಿಲುವೇನು; ಗೋವುಗಳ ಸಂರಕ್ಷಣಾ ಕಾನೂನನ್ನು ಯಾವಾಗ ರಚಿಸಲಾಗುವುದು ಮತ್ತು ಜಾರಿಗೆ ತರಲಾಗುವುದು ಯಾವಾಗ?